# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2118
2. ಸದಸ್ಯರ ಹೆಸರು : ಶ್ರೀ ಜಿ. ರಘು ಆಚಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 25.03.2021.

<table>
<tr><th>ಕ್ರ.ಸಂ.</th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td>ಅ)</td><td>ಬಹು ನಿರೀಕ್ಷಿತ ಭದ್ರಾ ಮೇಲ್ದಂಡೆ ಯೋಜನೆ ಯಾವ ಹಂತದಲ್ಲಿದೆ; ಇದು ಯಾವ ಕಾಲಮಿತಿಯೊಳಗೆ ಪೂರ್ಣಗೊಳ್ಳಬಹುದು; (ಮಾಹಿತಿ ಒದಗಿಸುವುದು)</td><td>ಭದ್ರಾ ಮೇಲ್ದಂಡೆ ಯೋಜನೆಯ ಪ್ರಸ್ತುತ ಹಂತದ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ.<br><br>ಭದ್ರಾ ಮೇಲ್ದಂಡೆ ಯೋಜನೆಯನ್ನು ಅನುದಾನದ ಲಭ್ಯತೆಯ ಮೇರೆಗೆ 2023–24ನೇ ಸಾಲಿನಲ್ಲಿ ಪೂರ್ಣಗೊಳಿಸಲು ಯೋಜಿಸಲಾಗಿದೆ.</td></tr>
<tr><td>ಆ)</td><td>ಭದ್ರಾ ಮೇಲ್ದಂಡೆ ಯೋಜನೆಗೆ ಕಳೆದ 3 ವರ್ಷಗಳಲ್ಲಿ ಬಿಡುಗಡೆ ಆಗಿರುವ ಅನುದಾನ ಎಷ್ಟು; (ವರ್ಷವಾರು ಮಾಹಿತಿ ಒದಗಿಸುವುದು)</td><td>ಭದ್ರಾ ಮೇಲ್ದಂಡೆ ಯೋಜನೆಗೆ ಕಳೆದ 3 ವರ್ಷಗಳಲ್ಲಿ ಬಿಡುಗಡೆ ಆಗಿರುವ ಅನುದಾನದ ವರ್ಷವಾರು ವಿವರ ಈ ಕೆಳಗಿನಂತಿವೆ:<br><table><tr><th>ಲೆಕ್ಕ ಶೀರ್ಷಿಕೆ 4701</th><th>ಅನುದಾನ</th></tr><tr><td>2017–18</td><td>549.56</td></tr><tr><td>2018–19</td><td>657.40</td></tr><tr><td>2019–20</td><td>842.74</td></tr><tr><td>2020–21 (ಫೆಬ್ರವರಿ–2021 ರ ಅಂತ್ಯಕ್ಕೆ)</td><td>396.39</td></tr></table></td></tr>
<tr><td>ಇ)</td><td>ಈ ಅನುದಾನದಲ್ಲಿ ಇದುವರೆವಿಗೂ ವೆಚ್ಚವಾಗಿರುವ ಅನುದಾನ ಎಷ್ಟು; ಹಾಗೂ ಉಳಿದಿರುವ ಅನುದಾನ ಎಷ್ಟು? (ಮಾಹಿತಿ ಒದಗಿಸುವುದು)</td><td>ಭದ್ರಾ ಮೇಲ್ದಂಡೆ ಯೋಜನೆಗೆ ಫೆಬ್ರವರಿ 2021 ರ ಅಂತ್ಯಕ್ಕೆ ರೂ.4,247.33 ಕೋಟಿಗಳ ಸಂಚಿತ ವೆಚ್ಚ ಮಾಡಲಾಗಿದ್ದು, ಇನ್ನೂ ರೂ.17,226.34 ಕೋಟಿಗಳ ಮೊತ್ತದ ಕಾಮಗಾರಿಗಳು ಬಾಕಿ ಇರುತ್ತದೆ.</td></tr>
</table>

**ಸಂಖ್ಯೆ: ಜಸಂಇ 50 ಡಬ್ಲ್ಯೂಎಲ್ಎ 2021**

(ಬಿ.ಎಸ್ ಯಡಿಯೂರಪ್ಪ)
ಮುಖ್ಯಮಂತ್ರಿ

**ಮಾನ್ಯ ವಿಧಾನ ಪರಿಷತ್ತು ಸದಸ್ಯರಾದ ಶ್ರೀ ಜಿ. ರಘು ಆಚಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2118 ಕ್ಕೆ ಅನುಬಂಧ**

ಭದ್ರಾ ಮೇಲ್ದಂಡೆ ಯೋಜನೆಯನ್ನು ಒಟ್ಟು 29.90 ಟಿ.ಎಂ.ಸಿ. ನೀರಿನ ಬಳಕೆಯೊಂದಿಗೆ ಚಿಕ್ಕಮಗಳೂರು, ಚಿತ್ರದುರ್ಗ, ದಾವಣಗೆರೆ ಹಾಗೂ ತುಮಕೂರು ಜಿಲ್ಲೆಗಳ 5,57,022 ಎಕರೆ (2,25,515 ಹೆಕ್ಟೇರ್) ಭೂಪ್ರದೇಶಕ್ಕೆ ಸೂಕ್ಷ್ಮ ನೀರಾವರಿ ಪದ್ಧತಿಯ ಮೂಲಕ ನೀರಾವರಿ ಸೌಲಭ್ಯ ಕಲ್ಪಿಸಲು ಮತ್ತು ಇದೇ ಜಿಲ್ಲೆಗಳಡಿ ಬರುವ 367 ಸಣ್ಣ ನೀರಾವರಿ ಕೆರೆಗಳನ್ನು ಅವುಗಳ ಸಾಮರ್ಥ್ಯದ ಶೇ.50 ರಷ್ಟನ್ನು ತುಂಬಿಸಲು ರೂಪಿಸಲಾಗಿರುತ್ತದೆ. ಈ ಯೋಜನೆಯ ರೂ.21,473.67 ಕೋಟಿಗಳ ಸಮಗ್ರ ಪುನರ್ ಪರಿಷ್ಕೃತ ಯೋಜನಾ ವರದಿಗೆ ಸರ್ಕಾರದಿಂದ ದಿನಾಂಕ:16.12.2020ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.

**ಭದ್ರಾ ಮೇಲ್ದಂಡೆ ಯೋಜನೆಯ ಕಾಮಗಾರಿಗಳ ಪ್ರಗತಿಯ ಪ್ರಸ್ತುತ ಹಂತ:**

- ✓ ಯೋಜನೆಯ ಮೊದಲನೇ ಹಂತದಲ್ಲಿ ಎರಡು ಲಿಫ್ಟ್ ಕಾಮಗಾರಿಗಳನ್ನು ಹಾಗೂ ಒಂದು ಸುರಂಗ ನಿರ್ಮಾಣದ ಕಾಮಗಾರಿಗಳನ್ನು 2008–09 ನೇ ಸಾಲಿನಲ್ಲಿ 3 ಪ್ಯಾಕೇಜ್‌ಗಳಲ್ಲಿ ಕೈಗೆತ್ತಿಕೊಂಡಿದ್ದರೂ, ಹಲವಾರು ಅಡಚಣೆಗಳಿಂದಾಗಿ ಕಾಮಗಾರಿಗಳಲ್ಲಿ ನಿರೀಕ್ಷಿತ ಪ್ರಗತಿ ಸಾಧ್ಯವಾಗಿರಲಿಲ್ಲ. ಸದರಿ ಅಡಚಣೆಗಳನ್ನು ನಿವಾರಿಸಿ, ಭದ್ರಾ ಜಲಾಶಯದಿಂದ ನೀರನ್ನು ಎತ್ತಿಅಜ್ಜಂಪುರ ಸುರಂಗದವರೆಗೆ ಪೂರೈಸುವ ಕಾಮಗಾರಿ ಮತ್ತು ಅಜ್ಜಂಪುರ ಸುರಂಗ ನಿರ್ಮಾಣ ಕಾಮಗಾರಿಯು ಪೂರ್ಣಗೊಳಿಸಿದ್ದು, ಯೋಜನೆಯನ್ನು ಪ್ರಾಯೋಗಿಕವಾಗಿ ಚಾಲನೆಗೊಳಿಸಿ ವಾಣಿವಿಲಾಸ ಸಾಗರ ಜಲಾಶಯಕ್ಕೆ ಅಕ್ಟೋಬರ್ 2019 ರಲ್ಲಿ ನೀರನ್ನು ಹರಿಸಲಾಗಿದೆ.
- ✓ ಭದ್ರಾ ಮೇಲ್ದಂಡೆ ಯೋಜನೆಯ ಮೊದಲನೇ ಹಂತದ ತುಂಗಾ ನದಿಯಿಂದ ಭದ್ರಾ ಜಲಾಶಯಕ್ಕೆ 17.40 ಟಿ.ಎಂ.ಸಿ ನೀರನ್ನು ಪೂರೈಸುವ ಕಾಮಗಾರಿ ಪ್ರದೇಶವು ವನ್ಯಜೀವಿ ಅರಣ್ಯವುಳ್ಳ ಪ್ರದೇಶದ ವ್ಯಾಪ್ತಿಯಲ್ಲಿದ್ದು, ವನ್ಯಜೀವಿ ಮಂಡಳಿ (NBWL) ತೀರುವಳಿ ಮತ್ತು ಅನುಮೋದಿತ ಮಿಟಿಗೇಶನ್ ಮೆಜರ್ಸ್ ಅನ್ವಯ ಕಾಮಗಾರಿಯನ್ನು ನಿರ್ವಹಿಸಲಾಗುತ್ತಿದ್ದು, ಕಾಮಗಾರಿಗಳು ಪ್ರಗತಿಯಲ್ಲಿವೆ.
- ✓ ಅಜ್ಜಂಪುರ ಸುರಂಗ ನಿರ್ಮಾಣದ ಪ್ರಾರಂಭದ ಪೂರ್ವದಲ್ಲಿ ವಿರೋಧಿಸಿದ ಸ್ಥಳೀಯರ ಬೇಡಿಕೆಯಂತೆ ತರೀಕೆರೆ ಏತ ಕಾಮಗಾರಿಯಡಿಯಲ್ಲಿ 79 ಕೆರೆಗಳನ್ನು ತುಂಬಿಸಲು ಮತ್ತು 20150 ಹೆಕ್ಟೇರ್ ಪ್ರದೇಶಕ್ಕೆ ಹನಿ ನೀರಾವರಿ ಪದ್ಧತಿಯಲ್ಲಿ ನೀರೊದಗಿಸಲು ಅಜ್ಜಂಪುರ ಸುರಂಗದ ಆಗಮನ ಮತ್ತು ನಿರ್ಗಮನ ಭಾಗದಲ್ಲಿ ತರೀಕೆರೆ ಏತ ನೀರಾವರಿ ಕಾಮಗಾರಿಯನ್ನು 2 ಪ್ಯಾಕೇಜುಗಳಲ್ಲಿ ಕೈಗೆತ್ತಿಕೊಂಡಿದ್ದು, ಕಾಮಗಾರಿಗಳು ಪ್ರಗತಿಯಲ್ಲಿವೆ.
- ✓ ಎರಡನೇ ಹಂತದಲ್ಲಿನ ಚಿತ್ರದುರ್ಗ ಶಾಖಾ ಕಾಲುವೆಯ ಸರಪಳಿ 0.00 ಕಿ.ಮೀ ನಿಂದ 134.597 ಕಿ.ಮೀ ರವರೆಗಿನ ಕಾಲುವೆ ಕಾಮಗಾರಿಗಳನ್ನು ಮತ್ತು ತುಮಕೂರು ಶಾಖಾ ಕಾಲುವೆಯು ಸರಪಳಿ 0.00 ಕಿ.ಮೀ ನಿಂದ 159.684 ಕಿ.ಮೀ ವರೆಗಿನ ಕಾಲುವೆ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದ್ದು, ಕಾಮಗಾರಿಗಳು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುತ್ತವೆ.

✓ ಚಿತ್ರದುರ್ಗ ಶಾಖಾ ಕಾಲುವೆಯಡಿ ಬರುವ ಫೀಡರ್ ಕಾಲುವೆಗಳ ಪ್ರಗತಿಯ ಹಂತದ ವಿವರಗಳು ಈ ಕೆಳಗಿನಂತಿವೆ:

a) ಹೊಳಲ್ಕೆರೆ ಫೀಡರ್ ಕಾಲುವೆಯ ಕಾಮಗಾರಿಯು ಪ್ರಗತಿಯಲ್ಲಿದೆ.

b) ಪಾವಗಡ, ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಕೆರೆ ತುಂಬಿಸುವ ಕಾಮಗಾರಿಗಳು ಪ್ರಗತಿಯಲ್ಲಿವೆ.

c) ಜಗಳೂರು ಶಾಖಾ ಕಾಲುವೆಯ ಅಂದಾಜನ್ನು ತಯಾರಿಸಲಾಗಿದ್ದು, ಪರಿಶೀಲನೆಯಲ್ಲಿರುತ್ತದೆ.

✓ ತುಮಕೂರು ಶಾಖಾ ಕಾಲುವೆಯಡಿ ಬರುವ ಫೀಡರ್ ಕಾಲುವೆಗಳ ಪ್ರಗತಿಯ ಹಂತದ ವಿವರಗಳು ಈ ಕೆಳಗಿನಂತಿವೆ:

a) ಶಿರಾ ತಾಲ್ಲೂಕಿನಲ್ಲಿ ಕೆರೆ ತುಂಬಿಸುವ ಕಾಮಗಾರಿಯನ್ನು ಟೆಂಡರ್ ಮೂಲಕ ವಹಿಸಿದ್ದು, ಕಾಮಗಾರಿಯನ್ನು ಪ್ರಾರಂಭಿಸಲು ಕ್ರಮ ಜರುಗಿಸಲಾಗಿದೆ.

b) ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ ಕೆರೆ ತುಂಬಿಸುವ ಕಾಮಗಾರಿಯ ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದೆ.

✓ ಚಿತ್ರದುರ್ಗ ಶಾಖಾ ಕಾಲುವೆಯ ಕಿ.ಮೀ. 0.00 ರಿಂದ 60.00 ರ ವರೆಗಿನ 36000 ಹೆಕ್ಟೇರ್ ಪ್ರದೇಶಕ್ಕೆ ಹನಿ ನೀರಾವರಿ ಸೌಲಭ್ಯ ಕಲ್ಪಿಸುವುದಕ್ಕಾಗಿ ಅಂದಾಜನ್ನು ತಯಾರಿಸಲಾಗಿದ್ದು, ಪರಿಶೀಲನೆಯಲ್ಲಿದೆ. ತುಮಕೂರು ಶಾಖಾ ಕಾಲುವೆಯ ಆರಂಭಿಕ ಭಾಗ 76 ಕಿ.ಮೀ ಅಡಿಯಲ್ಲಿ 28699.56 ಹೇಕ್ಟೆರುಗಳಿಗೆ ಸೂಕ್ಷ್ಮ ನೀರಾವರಿಯನ್ನು ಒದಗಿಸಲು, ಸರ್ವೆ, ತನಿಖೆ ಮತ್ತು ಅಂದಾಜುಗಳ ತಯಾರಿಕೆಯು ಪ್ರಗತಿಯಲ್ಲಿದೆ.

**ಆರ್ಥಿಕ ಪ್ರಗತಿ:**

ಭದ್ರಾ ಮೇಲ್ದಂಡೆ ಯೋಜನೆಯ ಕಾಮಗಾರಿಗಳನ್ನು ಹಂತ ಹಂತವಾಗಿ ಅನುಷ್ಠಾನಗೊಳಿಸಲಾಗುತ್ತಿದ್ದು, ಫೆಬ್ರವರಿ–2021 ರ ಅಂತ್ಯಕ್ಕೆ ರೂ.4,247.33 ಕೋಟಿಗಳ ಸಂಚಿತ ವೆಚ್ಚ ಮಾಡಲಾಗಿರುತ್ತದೆ.

****